# ವಿವರ





---



ಮುದ್ರಣಕಾರರು :
ಜಿ. ಎಚ್. ರಾಮರಾವ್, ಬಿ.ಎಸ್‌ಸಿ.
ಮೈಸೂರು ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು

# ಚಟಾಕಿ



## ಬೆನಕನ ಪೂಜೆ

ಬೆನಕ ಬಂದನು ಕಡುಬ ತಂದನು
ಮನೆಗೆ ಬಂದನು ; ಮುಂದೆ ನಿಂದೆನು
ಮನದಿ ನಲಿದೆನು ಮಣೆಯ ತಂದೆನು
ಸನುಮತನ ಬಲವಂದೆನು. ೧

ನಮ್ಮ ತೋಟದ ಹೂವ ತಂದೆನು
ನಮ್ಮ ಮಾವಿನ ತಳಿರ ತಂದೆನು
ನಮ್ಮ ಹಿತ್ತಿಲ ಹಣ್ಣ ತಂದೆನು
ನಮ್ಮ ಬೆನಕನಿಗೀಯಲು. ೨

ಎಳೆಯ ಬಾಳೆಯ ಕಂದ ತಂದೆನು
ಬಲಿತ ಕಬ್ಬಿನ ಕೋಲ ತಂದೆನು
ಫಲದ ಹೊಂಬಾಳೆಯನು ತಂದೆನು
ಒಲಿದು ಮಂಟಪ ಕಟ್ಟಲು. ೩

ಕೆರೆಯಲರಳಿದ ತಾವರೆಯ ನಾ-
ನರಸಿ ತಂದೆನು ಕಷ್ಟಪಡುತಲಿ,
ಸರವ ಕಟ್ಟುತ ಮಂಟಪವ ಸಿಂ
ಗರಿಸಿ ನೋಡುತ ನಲಿಯಲು. ೪

ನೆರೆಯ ಕೆಳೆಯರ ಮಂಟಪಂಗಳ
ಜರಿಯಿತೆನ್ನಾ ಪುಟ್ಟ ಮಂಟಪ-
ವರಳುಹೂಗಳ ಹಾರದಿಂದದು
ಮಿರುಗುತಿರ್ದುದು ನೋಡಲು. ೫

ಇಲಿಯನೇರುತ ಹಾವ ಹೊಟ್ಟೆಗೆ
ಛಲದಿ ಬಿಗಿಯುತ ಕೋರೆ ಹಲ್ಲನು
ಕಳಚಿ ಕೈಯಲಿ ಹಿಡಿದ ಬೆನಕನು
ಕುಳಿತುಕೊಂಡನು ಮಧ್ಯದಿ. ೬

ಒಳಗೆ ಪೀಠದಿ ಬೆನಕರಾಯನು
ಕುಳಿತುಕೊಳ್ಳಲು ಕೈಯ ಮುಗಿದೆನು,
ಕಳಿತ ಹಣ್ಣನು ಕಡುಬನರ್ಪಿಸು-
ತಳಿಲು ಸೇವೆಯ ಗೈದೆನು. ೭

“ ಬೆನಕ, ಬೆನಕ, ಏಕದಂತ,
ಬೆನಕ, ಬೆನಕ, ವಿಘ್ನನಾಯಕ ”
ಎನುತಲಿಪ್ಪತ್ತೊಂದು ಸಾರಿ
ಬೆನಕನಿಗೆ ನಾ ಮಣಿದೆನು. ೮

ಮಣಿದ ನನ್ನನು ನೋಡಿ ಹಿತದಲಿ
ಗಣಪ, "ಕಂದಾ, ನಿನ್ನ ವಿಘ್ನವು
ಕೆಣಕಿ ಪೀಡಿಸೆ ನನ್ನ ನೆನೆಯೈ
ಕ್ಷಣದಿ ಪೊರೆಯುವೆನೆಂ"ದನು. ೯

ಎಲ್ಲ ಕೆಲಸವನಾಗಮಾಡಲು
ಎಲ್ಲ ಕೆಲಸವ ಹಾಳುಮಾಡಲು
ಬಲ್ಲನೀ ಬೆನಕಪ್ಪನಿವನಿಂ
ಬಲ್ಲಿದರ ನಾನರಿಯೆನು. ೧೦

ಬೆನಕನೊಲಿಯಲದೇನಸಾಧ್ಯವು
ಜನಕೆ ಲೋಕದೊಳಿಲ್ಲ ಕಾಲದಿ?
ಬೆನಕ ಮುಳಿಯಲದೇನು ಸಾಧ್ಯವು?
ಬೆನಕ ಸಿದ್ಧಿಯ ದೇವನು. ೧೧

ಮೊದಲ ಪೂಜೆಯು ಬೆನಕರಾಯಗೆ
ಮೊದಲ ವರ ಬೆನಕಪ್ಪನಿಂದಲಿ
ಮೊದಲು ಪೂಜಿಸಿ ವರವ ಪಡೆದಗೆ
ಮುದವ ಕೊಡುವನು ಕಡೆಯಲಿ. ೧೨

# ಯಾವುದು ಹಿರಿದು ?

ಹಿಂದಿನದೆಲ್ಲ ಹಿರಿದಲ್ಲ;
ಇಂದಿನದೆಲ್ಲ ಕಿರಿದಲ್ಲ.
ಗುಣವುಳ್ಳುದೆಲ್ಲ ಹಿರಿದು ;
ಇಲ್ಲದುದೆಲ್ಲ ಕಿರಿದು
ತನ್ನಲ್ಲಿ ತಾನರಿತು ನಡೆವನೇ ಅರಿತ ನರನು.
ಅನ್ಯರನು ಬರಿದೆ ಅನುಕರಿಪನೇ ಮರುಳನಹನು.

# ತಾಯಿ

ತಾಯಿ ದೇವರೆಂದು ವೇದ
ಬಾಯಿ ಬಿಟ್ಟು ಹೇಳುತಿಹುದು,
ತಾಯಿ ದೇವರೆಂದು ಹಿರಿಯ-
ರೆಲ್ಲರರಿವರು ;
ತಾಯಿ ದೇವರೆಂದು ತಿಳಿದ-
ರೆಲ್ಲರೊರೆವರು. ೧

ಮನೆಯೆ ಮೊದಲ ಪಾಠಶಾಲೆ,
ಜನನಿ ತಾನೆ ಮೊದಲ ಗುರುವು,
ಜನನಿಯಿಂದ ಪಾಠಕಲಿತ
ಜನರು ಧನ್ಯರು ;
ಘನತೆಯಿಂದಲವರು ಬಾಳ್ವ-
ರೆನುತ ನುಡಿವರು. ೨

ಹೊಟ್ಟೆಯಲ್ಲಿ ಹೊತ್ತು ತಾಯಿ
ಬೆಟ್ಟದಷ್ಟು ಕಷ್ಟವನ್ನು
ಗಟ್ಟಿಮನದಿ ತಾಳ್ವಳಲ್ತೆ ;
ಕಂದಗೋಸುಗ
ಬಿಟ್ಟು ಸುಖವ, ತಾಳ್ವಳವಳು
ಬಂದ ದುಃಖವ. ೩

ಕಂದ ಬಳಲಿ ಬಂದನೆಂದು
ನೊಂದುಕೊಂಡು ಬೇಗ ಮಮತೆ
ಯಿಂದ ನಗುತ ನಗಿಸುತಮೃತ
ಬಿಂದುವೆರೆವಳು ;
ಬೆಂದ ಮನದ ಬೇಗೆಯುಳಿಸು-
ತಂದಗೊಳಿಪಳು. ೪

‘ ಎನ್ನ ಚಿನ್ನ ತಣ್ಣಗಿರಲಿ,
ಎನ್ನ ರನ್ನ ಸುಖವ ಪಡೆಯ
ಲೆನ್ನ ಮುದ್ದು ಕಂದ ಕೀರ್ತಿ
ವಡೆದು ಬಾಳಲಿ’—
ಎನ್ನುತಾಶಿಸುವಳು ತಾಯಿ
ಒಡಲ ಮರುಕದಿ. ೫

ಪಡೆದ ತಾಯಿ, ಜನುಮವಿತ್ತ
ಪೊಡವಿಯೆಂಬಿವೆರಡು ಸಗ್ಗ-
ದೆಡೆಗೆ ಮಿಗಿಲು ; ಸರ್ವಸಾಧು
ವರರು ಜಗದಲಿ
ಬಿಡುವರೆಲ್ಲವನ್ನಿವಕ್ಕೆ
ಪರಮ ಹರ್ಷದಿ. ೬

ತಾಯ ಮಾತಿಗಾಗಿ ರಾಮ
ರಾಯ[illegible]ವ ತೊರೆದು ನಡೆದ,

ತಾಯ ಸೆರೆಯ ಬಿಡಿಸೆ ಕೃಷ್ಣ
ಗೊಲ್ಲನಾದನು ;
ತಾಯ ಮಾತ ನಡಸೆ ಕರ್ಣ
ಬಿಲ್ಲ ತೊರೆದನು. ೭

ಮಾತೆಗಾಗಿ—ತಮ್ಮ ದೇಶ-
ಮಾತೆಗಾಗಿ—ಸಕಲ ರಾಜ-
ಪೂತರಸುವ ತೊರೆದರಂದು
ರಣದ ಕಣದಲಿ ;
ಖ್ಯಾತಿವೆತ್ತು ಮೆರೆವರಿಂದು
ಮಣಿಗಳಂದದಿ. ೮

ರನ್ನಗದ್ದುಗೆಯಲಿ ಮಾತೆ
ಮುನ್ನ ನೆಲಸೆ ವಿಜಯದಿಂದ
ಧನ್ಯರವಳ ಹಿರಿಯ ಹೆಸರ
ವಿಶದಗೊಳಿಸುತ,
ಕನ್ನಡಿಗ ಮರಾಟರಮಿತ
ಯಶವ ತಳೆದರು. ೯

ಅವರ ಹೆಸರನೆಲ್ಲ ಹೇಳು-
ತವರ ಕಥೆಯನೆಲ್ಲ ಕೇಳು-
ತವರ ಕುಲದಿ ಹುಟ್ಟಿ ಹೆಮ್ಮೆ
ಪಡನದಾವನು ?

ಅವರ ಸೇವಿಸಲ್ಕೆ ತವಕ
ಪಡನದಾವನು ? ೧೦

ಧರಣಿಗೆಲ್ಲ ತನ್ನ ಬೆಳಕ
ಹರಡಿ ಮೆರೆದ ಭರತಮಾತೆ
ಹೆರರ ಸೇವೆಯಿಂದ ಕಂದಿ
ಕುಂದಿ ಹೋದಳು ;
ತೊರೆದರೆನ್ನ ಮಕ್ಕಳೆಂದು
ನೊಂದುಕೊಳ್ವಳು. ೧೧

ನಮ್ಮ ತಾಯ ಗೋಳ ನೋಡಿ
ಸುಮ್ಮನಿಹುದು ಸರಿಯೆ ನಾವು
ನಮ್ಮ ಸೋದರರ್ಕಳೊಡನೆ
ಕದನಗೈಯುತ ?
ಅಮ್ಮನನ್ನು ಮರೆತು ಸೊಕ್ಕಿ
ಸದರವಾಡುತ ? ೧೨

ಬನ್ನಿ ! ತಾಯಿಗೆರಗಿ ಬೇಗ
ಮುನ್ನ ಗೈದ ತಪ್ಪನೆಲ್ಲ
ಮನ್ನಿಸೆಂದು ಕೈಯ ಮುಗಿದು
ಬೇಡಿಕೊಳ್ಳುವ.
ಬನ್ನಿ! ಭಾರತೀಯ ಕೃತಿಯ
ಮಾಡಿ ತೋರುವ. ೧೩

# ಚಟಾಕಿ

೧

ಅಪ್ಪನ ಜೇಬಿನ ದುಡ್ಡುಗಳೆಲ್ಲ
ಚಟಪಟಗುಟ್ಟುತ ಸಿಡಿಯುವುವು.
ಒಪ್ಪದ ನೀತಿಯ ಮಾತುಗಳೆಲ್ಲ
ತಟ್ಟನೆ ದಾರಿಯ ಹಿಡಿಯುವುವು.
ಬಗೆಬಗೆ ಬಣ್ಣದ ಹೂಗಳ ರೂಪದಿ
ಹಾರುತ ಬುಸುಬುಸುಗುಟ್ಟುವುವು.
ಉರಿಯನು ಸುರಿಸುತ ಮೊರೆಯುತ ತಿರುಗುತ
ಸರಸರನೆಲ್ಲೆಡೆ ಹರಿಯುವುವು,
ಸರುವರ ಕಿವಿಗಳ ಕೊರೆಯುವುವು,
ಮೂಗಿನ ಸೆಲೆಗಳನೊಡೆಯುವುವು ;
ಸಾರವ ತೊರೆಯುತ ಕಡೆಯಲಿ ಕಪ್ಪಗೆ
ನೆಲದಲಿ ಧೊಪ್ಪನೆ ಕೆಡೆಯುವುವು,
ಅಜ್ಜನ ಮಡಿಯನು ತೊಡೆಯುವುವು,
ಅಪ್ಪನ ಜೇಬುಗಳೊಡೆಯುವುವು,
ಸಿಡಿಯುವುವು.

೨

ಕರ್ಬೊಗೆಯ ಮೈವೊಗರ ಹಬ್ಬಿಸುತ ಜಗಕೆ
ಮಬ್ಬ ಕವಿಸುತ ಬರುವ ದೇವಿ ಯಾರಿವಳು ?

೧೨

ಕೆಂಜಡೆಯನಡಿಗಡಿಗೆ ಕೊಡಹುತ್ತಲಿಹಳು.
ಕಿಡಿಗಣ್ಣ ಬಿರುಬಿರನೆ ತಿರುಗಿಸುತಲಿಹಳು.
ಉರಿಯು ನಾಲಗೆಗಳನು ಮುಂದೆ ಚಾಚಿಹಳು.
ತನಿಗೆಂಡದುಂಡೆಗಳ ತಾನುಗುಳುತಿಹಳು.
ಸಿಡಿಲ ನಡುಗಿಸುವಂತೆ ಬೊಬ್ಬಿರಿಯುತಿಹಳು.
ಕುಲಗಿರಿಗಳೊಡೆವಂತೆ ಅಡಿಯಿಡುತಲಿಹಳು.
ಯುದ್ಧನರ್ತನದಿಂದ ಮತ್ತಳಾಗಿಹಳು—
ಘೋರರೂಪದ ಕಾಳಿಕಾದೇವಿಯಿವಳು.

೩

ಈ ಕರಾಳಿಯ ಕಂಡು ನಡುಗಿದೆನೊಡನೆ
ನೆಲದಲಿ ಕೆಡೆದೆನು.
ಧೈರ್ಯವುಡುಗಲು ಸಣ್ಣದನಿಯೊಳಗಿನಿತು
ಬೇಡುತ ನುಡಿದೆನು :—
“ ತಾಯಿ ಕೃಪೆಯಲಿ ಕಾಯಿ ನಮ್ಮನು. ನಿನ್ನ
ರೂಪವ ನೋಡಲು
ನಡುಗಿ ನಮ್ಮೆದೆ ತಡೆಯದೊಡೆವುದು; ಸೌಮ್ಯ
ರೂಪವ ತೋರಿಸು.
ರುಂಡಮಾಲೆಯ ರಕ್ತವಸ್ತ್ರವ ನೋಡು-
ತಿರೆ ಮೈಮರೆವೆವು.
ಆ ಫಿರಂಗಿಯ ಗುಂಡಿನಬ್ಬರ ಕಿವಿಗೆ
ಬೀಳಲು ಮಡಿವೆವು.

ನಮ್ಮ ಹಿರಿಯರು ನಿನ್ನ ಭಕ್ತರು ; ನಿನ್ನ
ಪೂಜಿಸಿ ನಲಿದರು.
ಅವರ ಮಕ್ಕಳು ನಾವು; ನಮ್ಮನು ಕರುಣೆ
ಯಿಂದಲಿ ಪಾಲಿಸು.
ನಮ್ಮ ಹೆದರಿಕೆಯೋಡಿಸು,
ಸೌಮ್ಯರೂಪವ ತೋರಿಸು."

೪

ನಾನಿಂತು ಕೈಮುಗಿದು ಹೊಗಳೆ,
ಕಣ್ಮುಚ್ಚಿ ಹೊಗಳುತಿರೆ ಮುಗುಳೆ,
ಸಿಡಿಲ ಪರಿಯಬ್ಬರವು ಜಗುಳೆ,
ಗುಡುಗ ದನಿಯನುಕರಿಸುವಂತು
ಮಾಕಾಳಿ ನುಡಿದಳಿಂತು :

೫

"ಹೆದರಬೇಡಿರಿ; ಘೋರರೂಪವನು ತೋರಿಸೆನು.
ಈ ಫಿರಂಗಿಯ ಗುಂಡ ಸಿಡಿಪೆನಿಲ್ಲಿ.
ಪಡುವ ದಿಕ್ಕಿಗೆ ನಡೆದು ಕಡಲ ತೆರೆಗಳನೊಡೆದು,
ನಡುಗಿಸುತ ಲೋಕಗಳ ಕುಣಿವೆನಲ್ಲಿ.
ಪಡುವನಾಡಿನ ಜನರ ಕಡೆಗಾಣದಸ್ತ್ರಗಳ
ಹಿಡಿದು ಮೈ ಗುಡಿಗಟ್ಟಿ ಕುಣಿವೆನಲ್ಲಿ.
ಕಡು ಮುದದಿ ಕುಣಿಕುಣಿದು ತಣಿವೆನಲ್ಲಿ.

ಕೆಂಡವನು ಕಾರುವ ಫಿರಂಗಿಗಳ ಗುಂಡುಗಳು
ಗುಂಡಿಗೆಯನೊಡೆಯುವುವೆ? ಪಡುವಣರು
ಕೊಂಡು ಹೋಗಲಿ. ನಿಮಗೆ ತಕ್ಕುದಲ್ಲದು. ಪಾಪ!
ಮಕ್ಕಳಿರ, ನೀವೆ ಮೃದು ಹೃದಯದವರು!
ಮೆಚ್ಚಿದೆನು, ಮೆಚ್ಚಿದೆನು ಹೆಚ್ಚಿ ಬರುವೀ ನಿಮ್ಮ
ಧೈರ್ಯದುಬ್ಬರವ ನೋಡಿ!
ಮೆಚ್ಚ ನೀವೆನು ನಿಮಗೆ ಸಿಡಿವೀ ಚಟಾಕಿಯನು ;
ಹಿಡಿಯಿರಿದ ಕೈಯ ನೀಡಿ!
ಕಾರದಿದು ಕಿಡಿಗಳನು, ತೋರದಾರ್ಭಟಗಳನು;
ಹಾರುವುದು ಬಣ್ಣಗೂಡಿ.
ಮೀರಿದುತ್ಸಾಹದಲಿ ಸುಡಿರೀ ಚಟಾಕಿಯನ್ನು ;
ಸುಡುತಾಡಿ ಮೋದಗೂಡಿ!
ಹಿಡಿಯಿರಿದ ಕೈಯ ನೀಡಿ!"

೬

ಹರಿಯಿತು ಹರ್ಷದ ಹೊನಲದು ದೇಶದಿ ಹಬ್ಬವು
ಹತ್ತಿರ ಬರುತಿರಲು,
ಹರಡುತ ಕಾಳಿಯ ವರದಾ ವಾರ್ತೆಯ ದೀಪಾ-
ವಳಿಯದು ಬರುತಿರಲು,
ಹೊರಲಾರದೆ ಸಾಹಸದಿ ಚಟಾಕಿಯ ಹೊರೆಗಳ
ಮೆಲ್ಲನೆ ತರುತಿರಲು,
ಸಿಡಿವ ಚಟಾಕಿಯ ತರುತಿರಲು.

ಹುಡುಗರು ನಲಿಯುತ ಕುಣಿಕುಣಿದಾಡುತ ಹಿಡಿದು ಚ-
ಟಾಕಿಯ ಸುಡುತಿಹರು.
ಸಿಡಿದು ಚಟಾಕಿಯು ಮೇಲಕೆ ಹಾರಲು ನಿಲ್ಲದೆ
ಚಪ್ಪಾಳೆ ತಟ್ಟುವರು.
ಸಡಗರಗೊಳ್ಳುತ ದೂರದಿ ನೋಡುತ ಲಲನೆಯ
ರೆಲ್ಲರು ನಗುತಿಹರು.
ಸಿಡಿಯೆ ಚಟಾಕಿಯು ನಗುತಿಹರು.
ಮುದ್ದಿನ ದೇವಿಯ ಮುದ್ದಿನ ಮಕ್ಕಳು ಗದ್ದಲ
ಮಾಡುತ ಬರುತಿಹರು.
ಮುದ್ದಿನ ಮಕ್ಕಳ ನಿದ್ದೆಯನೋಡಿಸಿ ನಗಿಸುತ
ಕುಣಿಸುತ ಬರುತಿಹರು.
ಚಟಪಟಗುಟ್ಟಿ ಚಟಾಕಿಯು ಮುಂಗಡೆ ದೀವಿಯ
ತೋರುತ ಬರುತಿರಲು,
ಪೆಟ್ಟಿಗೆ ಚಟ್ಟನೆ ಸಿಡಿವ ಪಟಾಸಿನ ಬಳಗವು
ಹಿಂಬಾಲಿಸುತಿರಲು,
ಅರಳನು ಹುರಿಯುವ ಪರಿಯಲಿ ಮೊರೆಯುತ ಬಲು ಚಿನು-
ಕುರುಳಿಗಳೈತರಲು,
ಸರಸರ ಗರಗರ ಶಬ್ದದಿ ಮೊರೆಯುತ ತಿರುಗುವ
ಬಾಣಗಳೈತರಲು,
ಬೆಳಕನು ಬೀರಿ ಮತಾಪಿನ ಸಾಲ್ಗಳು ಪಂಜನು
ಹಿಡಿಯುತ ಬರುತಿರಲು.

ಹೊಳೆಯುವ ಹೂಗಳ ಮಳೆಯನು ಸುರಿಸುತ ಹೂವಿನ
ಬಾಣಗಳೈತರಲು,
ಒಡೆಯ ಚಟಾಕಿಯು ಬರುತಿರಲು,
ಕಡು ಹಿತದಿಂದಲಿ ಬರುತಿರಲು ;
ಹರಿಯಿತು ಹರ್ಷದ ಹೊನಲು ಚಟಾಕಿಯ ಮೊಳಗದು
ಹತ್ತಿರ ಬರುತಿರಲು,
ದೀಪಾವಳಿಯದು ಬರುತಿರಲು.

೭

ಅಪ್ಪನ ಜೇಬಿನ ದುಡ್ಡುಗಳೆಲ್ಲ
ಚಟಪಟಗುಟ್ಟುತ ಸಿಡಿಯುವುವು.
ಹಾರುತ ಬುಸುಬುಸುಗುಟ್ಟುವುವು,
ಉರಿಯನು ಸುರಿಸುತ ಮೊರೆಯುವುವು,
ಸರಸರನೆಲ್ಲೆಡೆ ಹರಿಯುವುವು.
ಒಪ್ಪದ ನೀತಿಯ ಮಾತುಗಳೆಲ್ಲ
ತಟ್ಟನೆ ದಾರಿಯ ಹಿಡಿಯುವುವು.

# ಅಸಾಧ್ಯ ಎಂಬುದಿಲ್ಲ

ಕಟ್ಟಿಗೆಯ ಬಲು ಕಡೆಯೆ ಬೆಂಕಿ ಹುಟ್ಟುವುದು.
ಗಟ್ಟಿನೆಲವನು ಬಗೆಯೆ ನೀರು ಸಿಕ್ಕುವುದು.
ಕೆಚ್ಚೆದೆಯ ಸಾಹಸವ ಪಡೆದ ಮಾನವಗೆ
ಹೆಚ್ಚೇನ್? ಅಸಾಧ್ಯವೇನಿಲ್ಲ ಜಗದೊಳಗೆ.
ಹಿಡಿದ ಕೆಲಸವನೆಲ್ಲ ಸರಿದಾರಿಯಲ್ಲಿ
ಬಿಡದೆ ಮಾಡಲು ಬಹುದು ಫಲವು ಕಡೆಯಲ್ಲಿ.

ಭಾಸಕವಿಯ ಒಂದು ಸಂಸ್ಕೃತ ಶ್ಲೋಕದ ಅನುವಾದ

# ಮುಂದುಗಾಣಿಕೆ



ಹೂವಿಂದ ಹೂವಿಂಗೆ ಹಾರಿ ಮಕರಂದವನು
ಹೀರಿ ಮೊರೆಯುತ ನಲಿವ ಮರಿದುಂಬಿ, ನೀನು
ಹೂವಿನೀ ಸುಗ್ಗಿ ಶಾಶ್ವತವೆಂದು, ಮಕರಂದ
ಝರಿಯಾರದಿಹುದೆಂದು ನಂಬಿರುವೆಯೇನು ?

ತುಂಬುಮಧುಮಾಸ ಮುಗಿಯುವುದು;ಮಳೆ ಚಳಿ ಮಾಗಿ
ಸಾಗಿಬರುವುದು ; ಹೂವಿನುಬ್ಬು ಕುಗ್ಗುವುದು.
ತುಂಬಿ, ರೆಕ್ಕೆಗಳುಡುಗಿ ಮುಪ್ಪಡಸಿ ಹಸಿವಿಂದ
ಬಾಗಿ ಬಸವಳಿವಂದದೆಂತು ಮಧು ತಹುದು ?

ಮರಿದುಂಬಿ ಕೇಳಿಂದಿನಿಂದಲೇ ಎಚ್ಚತ್ತು
ಮುಂದೆ ಬರಲಿಹ ಪಾಡ ಮನಗಂಡು ನೋಡು ;
ಅರಸಿ ಮಕರಂದವನು ಬಿಡದೆ ಹನಿಹನಿಯಾಗಿ
ತಂದಿಟ್ಟು ಜೀವಸಂರಕ್ಷಣೆಯ ಮಾಡು.



# ಅಕ್ಕ

ಅಕ್ಕ, ನೀನೆಲ್ಲಿರುವೆ? ಮತ್ತೆಂದು ಬರುವೆ?
ನಿನ್ನ ನಡೆನುಡಿಗಳನು, ನಿನ್ನ ಮುಖಭಾವವನು,
ನಿನ್ನ ಮೃದುಹಾಸವನು, ಹೃದಯದಾ ಪ್ರೇಮವನು,
ಇನ್ನು ಮರೆಯುವೆನೆಂತು? ಪಡೆವೆನೆಂತು?
ಅಕ್ಕ ನಿನ್ನನು ನಾನು ಮರೆವೆನೆಂತು? ೧

ಅಕ್ಕ ನಿನ್ನನು ನಾನು ಮರೆಯಲಾರೆ.
ಮಠಕೆ ಹೋಗುವ ಮುನ್ನ ಮೈತೊಳೆದು ಮಡಿಯುಡಿಸಿ
ತಲೆಬಾಚಿ ಜಡೆ ಹೆಣೆದು, ಮೊಸರನ್ನವನು ಕಲಸಿ
ತಾಯಿಯೊಡನೆನಗೆ ನೀ ಕೈತುತ್ತು ಹಾಕುತಿದ್ದೆ.
ಅಕ್ಕ ನಾನಿಂದದನು ಮರೆಯಲಾರೆ. ೨

ಹರುಷದಿಂದಲಿ ನಿನ್ನ ಬಳಿಯೊಳಿದ್ದೆ.
ಮನೆಯ ಮುಂಗಡೆ ಹುಡುಗರೊಡನೆ ಚೆಂಡಾಡುತಿರೆ
ಬಳಲಿದನು ತಮ್ಮನೆಂದೊಡನೆ ತಿಂಡಿಯ ತಂದು—
ಮಗಳಿಗಿಂತಲು ತಮ್ಮ ಮಿಗಿಲೆಂದು-ಕೊಡುತಲಿದ್ದೆ.
ತರಳ ನಾನಂದದನು ತಿಳಿಯದಿದ್ದೆ. ೩

ಕಕ್ಕನೊಬ್ಬನೆ ಬಂದನಂದು ಮನೆಗೆ,
ಹೊರಗೆ ಬಿಸಲಿನ ಬೇಗೆ, ಒಳಗೆ ಮನಸಿನ ಬೇಗೆ
ಸೊರಗಿಸಿತು ಮುದುಕನನು. ನಡೆನಡೆದು ಕಾಲ್ಸೋತು
ಕಳೆಗುಂದಿ ಬೆವರ ಹನಿ ಮೊಗದಿಂದಲುರುಳುತಿರೆ,
ಕಕ್ಕ ಬಳಲುತ ಬಂದನಂದು ಮನೆಗೆ. ೪

ದುಗುಡ ಮುತ್ತಿತು ಮನೆಯ ಜನರನೆಲ್ಲ :
ನಿನ್ನ ಕಡೆಗಾಲದಾ ಕಥೆಯು ಕೇಳಿದರೆಲ್ಲ
ಮನಗರಗಿ ತರತರದಿ ಪೇಚಾಡಿ ಮರುಗಿದರು.
ಇನ್ನೊಂದು ದಿನ ಬಿಡದೆ ಕರೆತಂದೆನೇಕೆಂದು
ಬಗೆಗರಗಿ ಬಿಸುಸುಯ್ದನಪ್ಪನಂದು. ೫

ನಗೆಮೊಗದಿ ನೀನು ಮಲಗಿದ್ದೆಯಂತೆ.
ತಿಂಡಿಯನು ತಿಂದೆಲ್ಲ ಮಾತನಾಡುತಿರಲು
ದೊಡ್ಡ ದನಿಯಿಂದೆನ್ನ ಹೆಸರಿಟ್ಟು ಕರೆದೆಯಂತೆ.
ಹತ್ತಿರದಲಿದ್ದವರದೇನೆಂದು ಕೇಳುತಿರೆ,
ಮೊಗದಿರುಹಿ ಮೌನವನು ತಾಳ್ದೆಯಂತೆ. ೬

ಕಡೆಗೆ ಕಕ್ಕನೆ ಬಳಿಗೆ ಬಂದನಂತೆ.
'ತಮ್ಮನೆಲ್ಲಿ ?' ಎನುತ್ತ ಕೇಳೆ 'ಅವನಿಲ್ಲಿಲ್ಲ.
ತಮ್ಮೂರಿಗವ ನಡೆದನೇತಕವನೀಗೆ'ಂದು
ನಿನ್ನ ಕೇಳಿದನಂತೆ. ಅದನರಿತು ಕಳೆಗುಂದಿ
ಕಡುದುಗುಡದಿಂದ ಬಲು ನೊಂದೆಯಂತೆ. ೭

'ಒಂದಾಸೆ ನನಗಿದ್ದಿತೆ'ಂದೆಯಂತೆ.
'ಕಡೆಗಾಲದಲಿ ತಮ್ಮ ತಂದೀವ ತಣ್ಣೀರ
ಕುಡಿಯಬೇಕೆಂದಿದ್ದೆನದು ವಿಫಲವಾಯ್ತೆಂದು.
ನಡೆದನೂರಿಗೆ ತಮ್ಮ! ಹಾ! ನಮ್ಮ ಚಿಕ್ಕಪ್ಪ-
ನೊಂದು ದಿನ ಬಿಡದೊಯ್ದನೆ'ಂದೆಯಂತೆ. ೮

ಅದ ಕೇಳಿ ತಣ್ಣೀರ ತಂದರಂತೆ.
ಏತಕದು ? ನನಗೇಕೆ ? ಬೇಡ !' ಎನ್ನುತ ನುಡಿದು
ಕಣ್ಣ ಮುಚ್ಚಿದೆಯಂತೆ ; ಮೇಲುಸಿರ ಬಿಡುತಿದ್ದು
ಥಳಥಳನೆ ಹೊಳೆವವೊಲು ಕೂಡೆ ಕಣ್‌ಬಿಟ್ಟೆಯಂತೆ.
ಮತ್ತೆ ಕಣ್ ಮುಚ್ಚಲೇ ಇಲ್ಲವಂತೆ. ೯

ಅಕ್ಕ, ಮನ್ನಿಸು ನನ್ನ ತಪ್ಪನೆಲ್ಲ.
ನೀನೆಂತು ಕೊರಗಿದೆಯೊ ! ಮತ್ತೆಂತು ಮರುಗಿದೆಯೊ !
ನೀರನೊಲ್ಲದೆ ನೀನದೆಂತೆಂತು ಸೊರಗಿದೆಯೊ !
ಈ ತಮ್ಮನನು ನೆನೆದೆಂತೆಂತು ಮರುಗಿದೆಯೊ !
ಚಿಕ್ಕವನ ನೆನೆನೆನೆದದೆಂತಳಿದೆಯೊ ! ೧೦

ಮುಂದಾಗುವುದನೆಲ್ಲ ತಿಳಿಯಲಹುದೆ ?
ನೀನಿಂತು ಬಲು ಬೇಗ ತನುದೊರೆವೆಯೆಂದಾರು
ತಿಳಿದಿದ್ದರಂದದನು ಚಿಕ್ಕವನು ನಾನೆಂತು
ತಿಳಿಯಲಪ್ಪೆನು ? ನೀನು ಮರೆಯಾಗಲತ್ತತ್ತು
ಇಂದಿಗೂ ಕೊರಗುವೆನು. ನಿನಗರಿಯದೆ ? ೧೧

ಎಲ್ಲರಳುವರು ನಿನ್ನ ನೆನೆದು ನೆನೆದು.
ಅತ್ತೆಯಳುವರು : ಭಾವನಳಿದನಂದತ್ತತ್ತು ;
ತಾಯಿಯಳುವಳು ; ನಿನ್ನ ಕಡೆಯಾಸೆಯನು ನೆನೆದು
ಅಪ್ಪನಳುವನು ; ನೋಡು, ಅಮ್ಮನಳುತಿಹಳು.
ಎಲ್ಲರಳುವುದು, ಅಕ್ಕ, ಕೇಳಿಸದೆ ನಿನಗೆ ? ೧೨

ಅಕ್ಕ, ನೀನೆಲ್ಲಿರುವೆ ? ಮತ್ತೆಂದು ಬರುವೆ ?
ಯಾವ ಲೋಕದೊಳಿರುವೆ ? ಅಲ್ಲಿ ನೀನೆಂತಿರುವೆ ?
ಇಲ್ಲಿಯುವರಲ್ಲಿಹರೆ ? ಭಾವ ನಿನ್ನೊಡನಿಹನೆ ?
ಅಲ್ಲಿ ಬಂದನೆ ಕಕ್ಕ ? ಅಲ್ಲಿಯೂ ದುಗುಡವಿಹುದೆ ?
ಅಕ್ಕ ನಿನಗಲ್ಲಿಯೂ ಕೊರತೆಯಿಹುದೆ ? ೧೩

ಏನೆಂಬೆ ? ಕೊರತೆಯಿನಿತಿಲ್ಲೆಂಬೆಯಾ ?
ಇರಬಹುದು, ಸ್ವರ್ಗದಲಿ ಕುಂದಿಲ್ಲದಿರಬಹುದು ;
ಹರುಷದಿಂದಲಿ ಭಾವ ನಿನ್ನೆಡೆಯೊಳಿರಬಹುದು.
ದೊರೆವುದೇ ಅಲ್ಲಿ ತಮ್ಮನು ಕೊಡುವ ನೀರು ?
ಏನೆಂಬೆಯಕ್ಕ ? ಮತ್ತಿನ್ನೆಂದು ಬರುವೆ ? ೧೪

# ವಿಲಿಯಂ ಟೆಲ್*



ಬೆಟ್ಟ ಗುಡ್ಡಗಳಿಂದ ತುಂಬಿದ
ಪುಟ್ಟನಾಡು ಯುರೋಪು ಖಂಡದ
ನಟ್ಟನಡುವಿಹುದದರ ಹೆಸರನು
ಸ್ವಿಟ್ಸರ್‌ಲೆಂಡೆಂದೆಂಬರು. ೧

ಹರಿವ ಹೊಳೆಗಳ ದಡದಿ ತನ್ನಯ
ಕುರಿಯ ಮಂದೆಯ ಮೇಯಿಸುತ್ತ
ಕುರುಬ ವಿಲಿಯಂ ಟೆಲ್ಲನೆಂಬನು
ಹರುಷದಿಂದಲ್ಲಿದ್ದನು. ೨

ಪುಟ್ಟಮಂದೆಯ ಸಾಕಿ, ಕಷ್ಟವ
ಪಟ್ಟು ದುಡಿದು, ವಿವೇಕದಿಂದ
ಹೊಟ್ಟೆಹೊರೆಯುತಲವನು ಸಂತಸ
ಪಟ್ಟನಿದ್ದುದರಲ್ಲಿಯೆ. ೩

ಬಿಲ್ಲುವಿದ್ಯೆಯ ಬಲ್ಲ ಜಾಣರೊ-
ಳೆಲ್ಲ ವಿಲಿಯಂ ಟೆಲ್ಲನೇ ಬಲು

---

* ಅದೇ ಹೆಸರಿನ ಇಂಗ್ಲಿಷ್ ಕವನದ ಅನುವಾದ

ಬಲ್ಲಿದನು ; ಗುರಿಗಾರನವನಂ-
ತಿಲ್ಲ ಯೂರಿಯೊಳನ್ಯನು. ೪

ಮಗನು ಚಿಕ್ಕವನಿದ್ದನವನಿಗೆ :
ನಗುಮೊಗದ ಚೆಲುಗೂದಲಣುಗನು ;
ಬಿಗಿದ ಮೈಕಟ್ಟುಳ್ಳ ಬಾಲನು ;
ಮಿಗಿಲು ಸೊಬಗಿನ ಮುದ್ದೆಯು. ೫

ಕುರಿಗಳವನಿಗೆ ಜತೆಯು ಗೆಳೆಯರು :
ಮರಿಗಳನು ಹೆಸರಿಟ್ಟು ಕರೆವನು,
ತರತರದಿ ನೆಗೆದಾಡುತಿರಲವು
ತರಳ ಕುಣಿಯುತ ನಲಿವನು. ೬

ಹೊದ್ದದಾವಗಮವರ ದುಃಖದ
ಸದ್ದು ಸುದ್ದಿಗಳವರು ಶಾಂತರು
ಶುದ್ಧರ್‌ ಬಾಳ್ವಿಕೆಯು ಸೌಖ್ಯ ಸ-
ಮೃದ್ಧವಾಗಿಹುದೆಂ' ಬರು. ೭

ಕಳಕಳಿಸುವಾಕಾಶವೆಲ್ಲವ
ಗಳಿಗೆಯಲಿ ಕಾರ್ಮುಗಿಲು ಕವಿವುದು
ನಲವ ಮನೆಗಳನಮುಮು ! ಬಿಡದ-
ಪ್ಪಳಿಸುವುದು ಕಡು ಶೋಕವು ! ೮

ಮೆರೆಯುದಾ ಸ್ವಾತಂತ್ರ್ಯ ಸೂರ್ಯನ
ಕಿರಣವಾ ದೇಶದೊಳಗಂದು.
ಪರರ ಕರ್ಕಶ ರಾಜಶಾಸನ
ವರೆದುದಾ ನಾಡವರನು. ೯

ಆಸ್ಟ್ರಿಯದ ಪ್ರತಿನಿಧಿಯದೊಬ್ಬನು
ಸ್ವಾಮ್ಯವಾಳಲು ಬಂದನಲ್ಲಿಗೆ.
ಕಷ್ಟ! ಪಾಶವ ವೃತ್ತಿಯವನವ
ದುಷ್ಟ ಬಂದನು ಯೂರಿಗೆ. ೧೦

ಹೆಮ್ಮೆ ಹೆಚ್ಚಲು ತನ್ನ ಬಲ್ಮೆಯ-
ನೊಮ್ಮೆ ಮೆರೆಯಿಸ ಬೇಕೆನುತ್ತ
ಹಮ್ಮಿನಿಂದಾಗಸದಿ ಹಿಡಿಸಿದ-
ನೊಮ್ಮೆ ತನ್ನಯ ಟೋಪಿಯ. ೧೧

"ತಲೆಯ ತಗ್ಗಿಸಿರೆಲೆ ಗುಲಾಮರೆ,
ತಲೆಯ ತಗ್ಗಿಸಿರಿಲ್ಲವಾದೊಡೆ
ತಲೆಯ ನೆಲಕುರುಳಿಸುವೆನೆ"ಂದವ
ನೊಲಿದು ಡಂಗುರ ಹೊಯ್ಸಿದ. ೧೨

ಅಂದು ಟೆಲ್ಲನು ತನ್ನ ಕುರಿಗಳ
ಮಂದೆಯನು ಗುಡಿಸಿಲನು ತೊರೆಯುತ
ಕಂದನಿಂದೊಡಗೂಡಿ ನಗರಿಗೆ
ಬಂದನತಿ ಹಿತದಿಂದಲಿ. ೧೩

ಮನೆಗೆ ತಂದೆಯು ತಂದ ಕೊಳ್ಳಿಯ
ದಿನದಿನವು ನೋಡುತ್ತ ಹುಡುಗನು
'ವನಕೆ ಬೇಟೆಗೆ ಕೊಂಡು ಹೋಗೆ-
ನ್ನೆ'ನುತ ತಂದೆಯ ಬೇಡಿದ. ೧೪

ಗೆಳೆಯರೆಲ್ಲರು ಮುದವ ತಳೆದು
ಕಲೆತು ಹಬ್ಬದ ರಾತ್ರಿಗಳಲಿ

ಒಲಿದು ಸೋಜಿಗವೆನಿಪ ಸಾಹಸ
ಗಳನು ಬಣ್ಣಿಸಿ ನಲಿಯಲು; ೧೫
ಕೇಳುತದನಡಿಗಡಿಗೆ ಬಾಲನು
ತಾಳಿದನು ಮಿಗಿಲಾಸೆಯೊಂದನು ;
'ಕೈಲಿ ಬಿಲ್ಲನು ಹಿಡಿದು ಶೂರರ
ಸಾಲು ಸೇರುವೆನೆ'ನ್ನುತ. ೧೬
ನಡೆದರವರು ಷಮಾಯಿ ಮೃಗಗಳ
ಪಡೆಗಳಡಗಿದ ಕಾಡ ಕಡೆಗೆ ;
ಹುಡುಗ ಹಾಡುತ ಸಿಳ್ಳುಹಾಕುತ
ಸಡಗರದಿ ಬಲು ನಲಿದನು. ೧೭
ಯೂರಿಗೊದಗಿದ ದುಃಖದುರುಬೆಯು,
ಮೀರಿ ಬಹ ಕಿರುಕುಳದ ಪರಿಯು,
ಬಾರಿ ಬಾರಿಗೆ ನೆನೆದು ತಂದೆಯು
ದಾರಿಯಲಿ ಬಲು ನೊಂದನು. ೧೮
ಟೆಲ್ಲ ಕಂಡನು ದೊಡ್ಡ ಗುಂಪನು,
ಅಲ್ಲಿ ಎತ್ತಿದ ಟೋಪಿಯೊಂದನು,
ಎಲ್ಲರನು ಪೀಡಿಪನ ದುರ್ಮುಖ
ದಲ್ಲಿ ಹುಬ್ಬಿನ ಗಂಟನು. ೧೯
ಬರುವ ಗುಂಪಿನ ಮುಂದೆ ವಂದಿಗ
ಳುರದೆ ಸಾರುತ ನಡೆಯುತಿದ್ದರು-
'ಶಿರವ ಬಾಗಿಸಿರೆಲೆ ಗುಲಾಮರೆ,
ಶಿರವ ಬಾಗಿಸಿರೆ'ನ್ನುತ. ೨೦

ದುರುಳ ರಾಷ್ಟ್ರಾಧಿಪತಿ, ಟೆಲ್ಲನು
ಧರಣಿಗುರುಳುವನೆನುತ ನೆನೆದನು.
ಕುರುಬನಲ್ಲಿಯೆ ಸಾಲವೃಕ್ಷವ
ಜರೆದು ನೆಟ್ಟಗೆ ನಿಂದನು. ೨೧

"ಶಿರವ ಬಾಗಿಪೆ ದೇವಗೊಬ್ಬಗೆ,
ಶಿರವ ಬಾಗಿಸೆನನ್ಯ ಜನರಿಗೆ;
ಹರಣ ಹಗೆಗಳ ಕಯ್ಯೊಳಂತಃ
ಕರಣವೆನ್ನೊಳಗೆ"ಂದನು. ೨೨

ಮೇರೆ ಮೀರುತ ಕೋಪ ಬೆಳೆಯಿತು,
ಕಾರಿದುವು ಕಿಡಿಗಳನು ಕಂಗಳು;
ಸೇರೆ ಬಿಗಿಯಿತು; ಉಸಿರು ಹಿಡಿಯಿತು-
ಕ್ರೂರಿ ಗೆಸ್ಲರ್ ನುಡಿದನು: ೨೩

"ಹಿಡಿಯಿರಿವನನು! ಕಟ್ಟಿ ದಿಟ್ಟನ!
ನಡುಗದಿವನಣಕಿಸುವನೆನ್ನನು!
ದುಡುಕಿ ರಾಜದ್ರೋಹಿಯಾದನು.
ಕಡಿದು ಬಿಸುಡಿರಿ ಬೇಗನೆ. ೨೪

"ನಿಲ್ಲಿ!—ಲೋಕವೆ ಕೂಗುತಿರುವುದು
ಬಿಲ್ಲುಗಾರರು ಸ್ವಿಸ್ಸರೆನುತ:
ಇಲ್ಲಿ ತನ್ನಿರಿ ಮುದ್ದು ಮಗುವನು
ಬಿಲ್ಲ ಬಲ್ಮೆಯ ನೋಡುವ." ೨೫



ಒಂದು ನಿಂಬೆಯ ಗಿಡಕೆ ಕಂದನ
ತಂದುಕಟ್ಟುತ ಸೇಬು ಹಣ್ಣನ-
ದೊಂದ ನೆತ್ತಿಯ ಮೇಲುಗಡೆಯಿಡೆ,
ಕಂದನಚ್ಚರಿಗೊಂಡನು. ೨೬

ಕುರುಬ ಟೆಲ್ಲನು ಮಗನ ಕಾಣುತ
ಮರುಗಿ ಕಾತರನಾಗಿ ನುಡಿದನು :
"ಇರುವುದಾದರೆ ತಪ್ಪು ನನ್ನದು ;
ತರಳನಲ್ಲಪರಾಧಿಯು. ೨೭

"ಸುರಿಸು ದಿಟ್ಟನ ಮೇಲೆ ಸಿಟ್ಟನು ,
ಭರದಿ ಸಾಧಿಸು ಹಗೆಯನೆನ್ನೊಳು ;
ಕರುಣೆಯಿಂದೆಳಗೂಸ ರಕ್ಷಿಸು ,
ತರಳನನು ಸಂರಕ್ಷಿಸು." ೨೮

ಹಲುಬುವಾತನ ಮನವ ನೋಯಿಸ-
ಲೆಳಸಿ ಗೆಸ್ಲರನೆಂದನಿಂತು:
"ಎಳೆಯ ಹುಡುಗಗೆ ಕೆಡುಕ ಮಾಡೆನು,
ಚೆಲುವಗಾಯಸವೀಯೆನು. ೨೯
"ಎಲವೊ, ಹುಡುಗನ ದೇಹದಿಂದ
ನೆಲಕೆ ನೆತ್ತರ ಹನಿಯು ಬಿದ್ದು
ಕಲೆಯ ಮಾಡಿದರೊಡನೆ ನಿನ್ನನು
ಕೊಲಿಸುವೆನು ಕೇಳೆಚ್ಚರ! ೩೦
"ಚುರುಕುಗೈಯಿನ ಕುರುಬ, ಬಿಲ್ಲನು
ಭರದಿ ಬಗ್ಗಿಸಿ ಹೆದೆಯನೇರಿಸು;
ಹಿರಿದುಕೋ ಬತ್ತಳಿಕೆಯಿಂ ಬಲು
ಹರಿತವಾಗಿಹ ಸರಳನು. ೩೧
"ಗುರಿಯು ನಿನಗಾ ಸೇಬುಹಣ್ಣು;
ದೊರೆವ ಲಾಭವು ನಿನ್ನ ಬಿಡುಗಡೆ.
ಗುರಿಯು ತಪ್ಪಲು ಕೂಡೆ ನಿನಗೆ
ಮರಣ ತಪ್ಪದು, ಎಚ್ಚರ!" ೩೨
ಎದ್ದಿತಾಗಲೆ ಶೋಕ ಕೋಪದ
ಗದ್ದಲವು ಗುಂಪಿನೊಳಗೆಲ್ಲ;
ಸದ್ದುಮಾಡದೆ ಶಪಿಸೆ ಯೋಧರು,
ಬಿದ್ದು ನಾರಿಯರತ್ತರು. ೩೩
ನಿಂತ ತಾನೈವತ್ತು ಮಾರುಗ-
ಳಂತರದಿ ಮಗನಿರಲು ಟೆಲ್ಲನು,

ನಿಂತುಕೊಂಡನು ಚಲಿಸದಂದದ-
ಲಾಂತು ಕೈಯಲಿ ಬಿಲ್ಲನು. ೩೪
ಕಿಡಿಯು ಕಾರುತಲಿಹವು ಕಂಗಳು,
ಕಡಿದು ಕಚ್ಚಿಹನೌಡನವನು .
ಹಿಡಿದ ಬಿಲ್ಲೆದ್ದೆದ್ದು ಕುಣಿವುದು,
ನಡುಗುವರು ನೋಡುವವರು. ೩೫
ಧರಣಿ ದುರ್ಭರ ದುಃಖ ಸಂಕುಲ
ಭರಿತವಾಗಿಹ ಪರಿಯು ನಿಜವು.
ಹರಹರಾ! ಈ ಪರಿಯು ಕಷ್ಟವ-
ನರಿಯುದದು ತಾನೆಂದಿಗಂ. ೩೬
ಹುಡುಗ ನಿಂತನು ಧೈರ್ಯದಿಂದ,
ಉಡುಗದಿಹ ಮುಖರಾಗದಿಂದ ;
ನಡುಗದಿಹನವನಂದ ಚೆಂದ.
ಬೆಡಗ ಬೀರಿದ ನಂದನ. ೩೭
" ಅಪ್ಪ, ಬಿಡು ಬಾಣವನು ಬೇಗನೆ.
ತಪ್ಪಿಹೋಗದ ಗುರಿಯು-ನಿನ್ನದು.
ತಪ್ಪದಿಂದದು ; ತಪ್ಪಿತೆಂದದು ?
ತಪ್ಪದೆಂ " ದನು ಬಾಲನು. ೩೮
" ಇನ್ನು ದೇವನೆ ನಿನ್ನ ಪೊರೆವನು.
ನಿನ್ನ ಧೈರ್ಯವು ನನ್ನ ನಾಚಿಸಿ-
ತೆ " ನ್ನುತವ ಕಿವಿವರೆಗೆ ಸರಳೊಂ
ದನ್ನು ಸೆಳೆದನು, ಬಿಟ್ಟನು. ೩೯

ಹೋಯಿತದು, ಗಾಳಿಯನು ತೂರುತ
ಹಾಯಿತದು. ಜನರೆಲ್ಲ ಕೂಗಿದ-
‘ ರಾಯಿತಾಯಿತು.—ಹುಡುಗನುಳಿದನ-
ಪಾಯವಿನಿತಿಲ್ಲೆ ’ನ್ನುತ. ೪೦

ಸೋದರರ ತುಳಿಯುತ್ತ ಬದುಕಲು
ಮೋದದಲಿ ಯತ್ನಿಪರು ಜನರು.
ಆದರೇನದ ನೋಡಿ ತಾಳ್ವನೆ
ಆ ದಯಾನಿಧಿ ದೇವನು ? ೪೧

ಹರಿಯು ತೋರಿದ ದಾರಿಯಿಂದಾ
ಸರಳು ಹೋಯಿತು ವೇಗದಿಂದ.
ಎರಡು ಹೋಳಿಗೆ ಸೀಳಿ ಹಣ್ಣದು
ಮರದ ಮೂಲದೊಳುರುಳಿತು. ೪೨

“ ಶೂರ, ಮೆಚ್ಚಿದೆ ನಿನ್ನ ವಿದ್ಯೆಗೆ !
ಧೀರ ಬಾಲನ ಸಾಹಸಕ್ಕೆ !
ಶೂರ ನಿನ್ನನು ಮನ್ನಿಸಿರುವೆನು.
ಸಾರು ನೀ ಮನೆಗೆಂ”ದನು. ೪೩

ನಾಡನಾಳ್ವನ ನುಡಿಯ ಕೇಳುತ
ಕೂಡೆ ಟೆಲ್ಲನು ನುಡಿದನಿಂತು .
“ ಹಾಡಿ ಹೊಗಳೆನು ನಿನ್ನ, ಕೇಳ್ ನೀ
ನೀಡಿದುತ್ತಮ ಭಾಗ್ಯಕೆ. ೪೪

“ ದೇವದೇವನು ನಮಗೆ ಬಂದಾ
ನೋವ ಕಳೆದನು ಕರುಣೆಯಿಂದ.

ದೇವನೊಬ್ಬನ ಹೊಗಳೆ ಸಲ್ಲುವುದು.
ದೇವನನೆ ನಾ ನುತಿಪೆನು. ೪೫
" ಕೇಳು, ಕೇಳೆಲೆ ಗರ್ವಿ ಮಾನವ,
ಹೇಳು, ' ನಾನಿಂದುಳಿದೆನೆ 'ನ್ನುತ.
ತಾಳು ಹರ್ಷವ ' ಯಮಗೆ ಸಿಕ್ಕುತ
ಬಾಳಿ ಬಂದೆನು ' ಎನ್ನುತ. ೪೬
" ಗುರಿಯು ತಪ್ಪುತ ಸರಳು ಕೂಸಿನ
ಶಿರವ ತಾ ಕೊರೆದಿದ್ದಿತಾದೊಡೆ,
ದುರುಳ, ಕೂಡಲೆ ನಿನ್ನ ತಲೆಯುದು
ಧರಣಿಗುರುಳುತಲಿದ್ದಿತು. ೪೭
" ನೋಡು, ಬಾಲಗೆ ಕೇಡು ಬಂದರೆ
ಕೂಡೆ ಹೊಡೆಯಲು ಹಿರಿದ ಸರಳ.
ನೋಡು, ಮೊದಲಿನ ಗುರಿಯೆ ದಕ್ಕಿತು.
ಹಾಡಿ ಹೊಗಳಾ ದೇವನ !" ೪೮
ಎಂದು ವಿಲಿಯಂ ಟೆಲ್ಲ ನುಡಿಯುತ
ಕಂದನಿಂದೊಡಗೂಡಿ ನಡೆದನು.
ಅಂದು ದುರಹಂಕಾರಿ ತಾ ಕಳೆ-
ಗುಂದಿ ನಾಚುತ ನಿಂದನು. ೪೯
ಪೊರೆದ ದೇವನು ನೀತಿವಂತರ.
ಹರಿದ ದೇವನು ಪಾಪದಿರವ.
ಪೊರೆವನಾತನು ದೀನಜನಗಳ—
ಪರಮ ಪಿತನಿಗೆ ಮಂಗಳಂ ೫೦